# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 286
ಸದಸ್ಯರ ಹೆಸರು : ಶ್ರೀ ಪ್ರಕಾಶ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 15.12.2021
ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ವಿಜಯಪುರ ಜಿಲ್ಲೆಯಲ್ಲಿ ಲೋಕೋಪಯೋಗಿ ಇಲಾಖೆಗೆ ಸೇರಿದ ಎಷ್ಟು ಬ್ರಿಡ್ಜ್ ಮತ್ತು ರಸ್ತೆಗ್ಗಳು ಹಾಳಾಗಿವೆ; (ವಿವರ ನೀಡುವುದು) | ಲೋಕೋಪಯೋಗಿ ಇಲಾಖೆ ಉತ್ತರ ವಲಯದ ವ್ಯಾಪ್ತಿಯಲ್ಲಿ ಬರುವ ವಿಜಯಪುರ ಜಿಲ್ಲೆಯಲ್ಲಿ 9.20 ಕಿಮೀ ಉದ್ದದ 6 ರಾಜ್ಯ ಹೆದ್ದಾರಿಗಳು ಹಾಗೂ 40.22 ಕಿಮೀ ಉದ್ದದ 11 ಜಿಲ್ಲಾ ಮುಖ್ಯ ರಸ್ತೆಗಳು ಹಾಳಾಗಿರುತ್ತವೆ. ಅದರಲ್ಲಿ ರಾಜ್ಯ ಹೆದ್ದಾರಿಗಳ ಮೇಲಿನ 6 ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ಮೇಲಿನ 7 ಸೇತುವೆ/ಕಲ್ವರ್ಟಗಳು ಶಿಥಿಲಗೊಂಡಿರುತ್ತವೆ. (ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ)<br><br>ರಾಷ್ಟ್ರೀಯ ಹೆದ್ದಾರಿ ವಲಯಕ್ಕೆ ಸಂಬಂಧಿಸಿದಂತೆ ವಿಜಯಪುರ ಜಿಲ್ಲೆಯ ವ್ಯಾಪ್ತಿಯಲ್ಲಿ ಈ ಕೆಳಕಂಡ ರಸ್ತೆಗಳು ಹಾಳಾಗಿರುತ್ತವೆ.<br><br>(1) ರಾಷ್ಟ್ರೀಯ ಹೆದ್ದಾರಿ ನಂ.548ಬಿ ಕಿಮೀ 0.00 (ವಿಜಯಪುರ ಪ್ರವಾಸಿಮಂದಿರ) ರಿಂದ 35.00 (ತೇಲಸಂಗ) ರ ವರಗೆ ರಸ್ತೆ ಆಯ್ದಭಾಗಗಳು.<br>(2) ರಾಷ್ಟ್ರೀಯ ಹೆದ್ದಾರಿ ನಂ.548ಬಿ (ಮುರಮ್-ಇಂಡಿ-ವಿಜಯಪುರ ಸೆಕ್ಷನ್) ಕಿಮೀ 0.00 ರಿಂದ 51.50 ರ ವರಗೆ ರಸ್ತೆ.<br>(3) ರಾಷ್ಟ್ರೀಯ ಹೆದ್ದಾರಿ ನಂ.166ಇ (ತಿಕೋಟಾ- ಬಿಜ್ಜರಗಿ- ಬಾಬಾನಗರ- ಮಹಾರಾಷ್ಟ್ರ ಗಡಿವರೆಗೆ) ಕಿಮೀ 0.00 ರಿಂದ 24.00 ರವರೆಗೆ ರಸ್ತೆ.<br>(4) ರಾಷ್ಟ್ರೀಯ ಹೆದ್ದಾರಿ ನಂ.561ಎ (ವಿಜಯಪುರ-ಅರಕೇರಿ-ಸಿದ್ದಾಪೂರ - ಮಹಾರಾಷ್ಟ್ರ ಗಡಿವರೆಗೆ) ಕಿಮೀ 0.00 ರಿಂದ 12.00 ರವರೆಗೆ ರಸ್ತೆ. |
| ಆ) | ಲೋಕೋಪಯೋಗಿ ಇಲಾಖೆ ಕೈಗೊಂಡಿರುವ ಕಾಮಗಾರಿಗಳಾವುವು? (ವಿವರ ನೀಡುವುದು) | ಪ್ರಸಕ್ತ ಸಾಲಿನಲ್ಲಿ ವಿಜಯಪುರ ಜಿಲ್ಲೆಯಲ್ಲಿ ಲೋಕೋಪಯೋಗಿ ಇಲಾಖೆಯಿಂದ 2.40 ಕಿಮೀ ಉದ್ದದ ಒಂದು ರಾಜ್ಯ ಹೆದ್ದಾರಿ ಹಾಗೂ 18.07 ಕಿಮೀ ಉದ್ದದ 6 ಜಿಲ್ಲಾ ಮುಖ್ಯ ರಸ್ತೆಗಳ ಸುಧಾರಣೆ/ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. (ವಿವರಗಳನ್ನು ಅನುಬಂಧ-2 ರಲ್ಲಿ ನೀಡಿದೆ)<br><br>ಮುಂದುವರೆದು, ರಾಷ್ಟ್ರೀಯ ಹೆದ್ದಾರಿ ವಲಯಕ್ಕೆ ಸಂಬಂಧಿಸಿದಂತೆ ರಾಷ್ಟ್ರೀಯ ಹೆದ್ದಾರಿ ನಂ.548ಬಿ ಕಿಮೀ 0.00 (ವಿಜಯಪುರ ಪ್ರವಾಸಿಮಂದಿರ) ರಿಂದ ಕಿ.ಮೀ. 35.00 (ತೇಲಸಂಗ) ರವರೆಗೆ ರಸ್ತೆ ನಿರ್ಮಾಣ ಕಾಮಗಾರಿಯು ರೂ.766.64 ಕೋಟಿಗಳಿಗೆ ಅನುಮೋದನೆಯಾಗಿದ್ದು, ಕಾಮಗಾರಿಗೆ ಟೆಂಡರ್ ಕರೆದಿದ್ದು, ತಾಂತ್ರಿಕ ಪರಿಶೀಲನೆಯ ಹಂತದಲ್ಲಿದೆ. ಟೆಂಡರ್ ಪ್ರಕ್ರಿಯೆ ಮುಕ್ತಾಯದ ನಂತರ ಕಾಮಗಾರಿ ಪ್ರಾರಂಭಿಸಲಾಗುವುದು. ಸಧ್ಯ ಸದರಿ ರಸ್ತೆಯನ್ನು ನಿರ್ವಹಣಾ ಯೋಜನೆ ಅಡಿಯಲ್ಲಿ ದುರಸ್ಥಿ ಕೈಗೊಂಡು, ರಸ್ತೆ ಸುಗಮ ಸಂಚಾರಕ್ಕೆ ಅನುಕೂಲ |

| ಪ್ರಶ್ನೆಗಳು | | ಉತ್ತರಗಳು |
|---|---|---|
| | | ಮಾಡಲಾಗುವುದು.<br>**ರಾಷ್ಟ್ರೀಯ** ಹೆದ್ದಾರಿ 548ಬಿ ಸರಪಳಿ 0.00 ರಿಂದ 51.50 ಕಿ.ಮೀ. ರವರೆಗೆ ಹಾಳಾದ ರಸ್ತೆಯನ್ನು ದುರಸ್ತಿ ಕಾಮಗಾರಿ ನಿರ್ಮಾಣಕ್ಕಾಗಿ FDR ಅಡಿ ತಯಾರಿಸಿರುವ ಅಂದಾಜು ಪತ್ರಿಕೆಯನ್ನು ತಾಂತ್ರಿಕ ಪರಿಶೀಲನೆಗಾಗಿ ಭೂ-ಸಾರಿಗೆ ಮಂತ್ರಾಲಯ, ಪ್ರಾದೇಶಿಕ ಕಛೇರಿ ಬೆಂಗಳೂರು ಇವರಿಗೆ ಸಲ್ಲಿಸಲಾಗಿದೆ.<br>ರಾಷ್ಟ್ರೀಯ ಹೆದ್ದಾರಿ ನಂ.166ಇ ಯ ಸರಪಳಿ 0.00 ರಿಂದ 24.00 ಕಿ.ಮೀ. ರವರೆಗೆ ಹಾಳಾದ ರಸ್ತೆಯನ್ನು ಅಭಿವೃದ್ಧಿಪಡಿಸಲು ನಿಯತಕಾಲಿಕ ನವೀಕರಣಕ್ಕಾಗಿ ಅಂದಾಜು ಪತ್ರಿಕೆಯನ್ನು ತಾಂತ್ರಿಕ ಪರಿಶೀಲನೆಗಾಗಿ ಭೂ-ಸಾರಿಗೆ ಮಂತ್ರಾಲಯ, ಪ್ರಾದೇಶಿಕ ಕಛೇರಿ ಬೆಂಗಳೂರು ಇವರಿಗೆ ಸಲ್ಲಿಸಲಾಗಿದೆ.<br>ರಾಷ್ಟ್ರೀಯ ಹೆದ್ದಾರಿ ನಂ.561ಎ ಕಿಮೀ 0.00 ರಿಂದ 12.00 ರವರೆಗಿನ ಹಾಳಾದ ರಸ್ತೆಯ ನಿರ್ಮಾಣಕ್ಕಾಗಿ ವಾರ್ಷಿಕ ಯೋಜನೆ 2021-22 ರಡಿ ಅಂದಾಜು ಪತ್ರಿಕೆಯನ್ನು ತಯಾರಿಸಿ ತಾಂತ್ರಿಕ ಪರಿಶೀಲನೆಗಾಗಿ ಭೂ-ಸಾರಿಗೆ ಮಂತ್ರಾಲಯ, ಪ್ರಾದೇಶಿಕ ಕಛೇರಿ ಬೆಂಗಳೂರು ಇವರಿಗೆ ಸಲ್ಲಿಸಲಾಗಿದೆ.<br>ಮುಂದುವರೆದು, ಮಾನ್ಯ ಸರ್ವೋಚ್ಚ ನ್ಯಾಯಾಲಯದ ರಸ್ತೆ ಸುರಕ್ಷತಾ ಸಮಿತಿಯ ಆದೇಶದಂತೆ ಯೋಜನೆ ಮತ್ತು ರಸ್ತೆ ಆಸ್ತಿ ನಿರ್ವಹಣಾ ಕೇಂದ್ರ ವತಿಯಿಂದ ರಾಜ್ಯದ 42 ಸೇತುವೆಗಳಿಗೆ ಸಂಬಂಧಿಸಿದಂತೆ ಅಗತ್ಯ ದುರಸ್ತಿ ಪುನಶ್ಚೇತನ, ಪುನರ್ ನಿರ್ಮಾಣ ಮತ್ತು ಅಗಲೀಕರಣ ಹಾಗೂ ಇತ್ಯಾದಿ ಸುಧಾರಣ ಕ್ರಮ ಕೈಗೊಳ್ಳಲು ಸೂಚಿಸಿರುವುದರಿಂದ ಲೋಕೋಪಯೋಗಿ ಇಲಾಖೆ ವ್ಯಾಪ್ತಿಯ ಕೆ.ಆರ್.ಡಿ.ಸಿ.ಎಲ್ ವತಿಯಿಂದ ಪರಿವೀಕ್ಷಣೆ ಮಾಡಿಸಲಾಗಿದ್ದು, ಅದರನ್ವಯ ಬಿಜಾಪುರ ಜಿಲ್ಲೆಯಲ್ಲಿ ಎರಡು ಸೇತುವೆಗಳ ಬಗ್ಗೆ ಈ ಕೆಳಕಂಡಂತೆ ವರದಿ ಪಡೆಯಲಾಗಿರುತ್ತದೆ.<br>1. ವಿಜಯಪುರ ತಾಲ್ಲೂಕು ಸಾರವಾಡ ಬಳಿ ರಾಜ್ಯ ಹೆದ್ದಾರಿ-34ರ ಕಿ.ಮೀ. 347.9 ರಲ್ಲಿ ಬೃಹತ್ ಸೇತುವೆ ನಿರ್ಮಾಣ – ಸೇತುವೆ ಉದ್ದ 111.20 ಮೀಟರ್<br>2. ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕು, ಅಫ್ಜಲ್‌ಪುರ ರಾಜ್ಯ ಹೆದ್ದಾರಿ-34ರ ಕಿ.ಮೀ. 232.50 ರಲ್ಲಿ ಬೃಹತ್ ಸೇತುವೆ ನಿರ್ಮಾಣ – ಸೇತುವೆ ಉದ್ದ 432.60 ಕಿ.ಮೀ. |

ಲೋಇ 105 ಸಿಕ್ಯೂಎನ್ 2021(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು